# ನೀತಿವಾಕ್ಯಾಮೃತಕಾರ ಸೋಮದೇವಸೂರಿಯ ದೃಷ್ಟಿಯಲ್ಲಿ ರಾಜ್ಯ-ಒಂದು ವಿಶ್ಲೇಷಣೆ

**ಪ್ರೊ. ಶ್ಯಾಮಲಾ ರತ್ನಕುಮಾರಿ**

ಸೋಮದೇವಸೂರಿ ಕ್ರಿಸ್ತಶಕ ೯೪೦–೯೭೦ರ ಅವಧಿಯಲ್ಲಿ ಜೀವಿಸಿದ್ದ ಜೈನ ಕವಿ. ಇವನ ಬಗೆಗಿನ ಮಾಹಿತಿಗಳ ಆಧಾರಗಳೆಂದರೆ ಇವನ ಸ್ವಕೀಯ ಗ್ರಂಥ ಯಶಸ್ತಿಲಕಚಂಪೂ ಹಾಗೂ ಪರಭಣಿ ತಾಮ್ರಪಟಗಳು. ಯಶಸ್ತಿಲಕಚಂಪೂ ಗ್ರಂಥದ ಪ್ರಸ್ತಾವನೆಯಲ್ಲಿ ತಾನು ನೇಮಿಚಂದ್ರರ ಶಿಷ್ಯನೆಂದೂ, ಮಹಾನ್ ಶಾಸ್ತ್ರ ಪಂಡಿತನೂ, ಸುಕವಿಯೂ ಆಗಿದ್ದನೆಂದೂ ಕ್ರಿ.ಶ. ೯೫೯ರಲ್ಲಿ ರಾಷ್ಟ್ರಕೂಟರ ಸಾಮಂತರಾದ ಬೋದನ ಅಥವಾ ವೇಮುಲವಾಡ ಚಾಲುಕ್ಯ ರಾಜಕುಮಾರ ಇಮ್ಮಡಿ ಅರಿಕೇಸರಿಯ ಪುತ್ರ ವಾಘರಾಜನ ಪೋಷಣೆಯಲ್ಲಿ ಗಂಗಾಧರಂ ಎಂಬಲ್ಲಿ ಯಶಸ್ತಿಲಕ ಚಂಪೂ ಗ್ರಂಥವನ್ನು ಬರೆದು ಮುಗಿಸಿದನೆಂದೂ ಆಗ ರಾಷ್ಟ್ರಕೂಟ ಚಕ್ರವರ್ತಿ ಮೂರನೇ ಕೃಷ್ಣನು ಮೇಲ್ಪಾಟಿ (ಉತ್ತರ ಆರ್ಕಾಟ್ ಜಿಲ್ಲೆ) ನೆಲೆವೀಡಿನಿಂದ ಆಳುತ್ತಿದ್ದನೆಂದೂ ತಿಳಿಯುತ್ತದೆ. ಅಲ್ಲದೆ ಈತನು ಅರಿಕೇಸರಿಯ ಪುತ್ರ ಭದ್ರದೇವನ ರಾಜಗುರುವೂ ಆಗಿದ್ದನು. ಪ್ರಾಯಶಃ ಈ ಸಮಯದಲ್ಲೇ ನೀತಿವಾಕ್ಯಾಮೃತಗ್ರಂಥವನ್ನು ಬರೆದಿರಬೇಕು. ಪರಭಣಿ ತಾಮ್ರಪಟಗಳು ಜೈನ ಪಂಡಿತನೂ, ಆಚಾರ್ಯನೂ ಆದ ಈತನಿಗೆ ಬಸದಿಯ ಮೇಲ್ವಿಚಾರಣೆಗಾಗಿ ಸಬ್ಬಿಸಾಸಿರ ನಾಡಿನ ರೇಪಾಕ ಹನ್ನೆರಡರಲ್ಲಿದ್ದ ಕುಟ್ಟಂ ವೃತ್ತಿ ವನಿಕಟುಪುಲು ಎಂಬ ಗ್ರಾಮವನ್ನು ಚಾಲುಕ್ಯ ದೊರೆ ಮುಮ್ಮಡಿ ಅರಿಕೇಸರಿ ದಾನವಾಗಿ ಕೊಟ್ಟ ವಿಷಯವನ್ನು ತಿಳಿಸುತ್ತದೆ.

ಪ್ರಸ್ತುತ ನೀತಿವಾಕ್ಯಾಮೃತದಲ್ಲಿ ಉಕ್ತವಾಗಿರುವ ಎರಡು ರಾಜ್ಯ ಪರಿಭಾಷಾಸೂತ್ರಗಳ ವಿಶ್ಲೇಷಣೆಯನ್ನು ನೀಡಲಿಚ್ಛಿಸುತ್ತೇನೆ.

ನೀತಿವಾಕ್ಯಾಮೃತ ಗ್ರಂಥವು ರಾಜ್ಯಶಾಸ್ತ್ರದ ಕೈಪಿಡಿಯಂತಿದ್ದು ಕೌಟಿಲ್ಯನ ಅರ್ಥಶಾಸ್ತ್ರದ ಪ್ರಾಥಮಿಕ ಪರ್ವವೆಂದು ಪರಿಗಣಿಸಲ್ಪಟ್ಟಿದೆ. ಇದೊಂದು ಸೂತ್ರ ಗ್ರಂಥವಾಗಿದ್ದು ೧೬೭೦ ಸೂತ್ರಗಳನ್ನೂ ೩೨ ಸಮುದ್ದೇಶಗಳೆಂಬ ಅಧ್ಯಾಯಗಳನ್ನೊಳಗೊಂಡಿದೆ. ಇದು ರಾಜ್ಯ, ಸ್ವರೂಪ ರಾಜನ ಹಾಗೂ ರಾಜ್ಯಾಂಗಗಳ ಕಾರ್ಯಚರಣೆಗಳ ಬಗ್ಗೆ ವಿವರ ನೀಡುವ ಗ್ರಂಥವಾಗಿದೆ.

ಗ್ರಂಥದ ಮೊದಲ ಸೂತ್ರದಲ್ಲೆ ರಾಜ್ಯದ ಪರಿಭಾಷೆಯನ್ನು ಹೇಳುವ ಮೂಲಕ ಗ್ರಂಥದ ವಸ್ತು ನಿರ್ದೇಶವನ್ನೂ ಮಾಡಿದ್ದಾನೆ. ಫಲರೂಪವಾದ ಮಂಗಳಾಚರಣೆಯನ್ನೂ ಮಾಡಿದ್ದಾನೆ ಸೂತ್ರಕಾರ ಸೋಮದೇವ. ಈ ಪರಿಭಾಷಾ ಸೂತ್ರ ಇಂತಿದೆ : "ಧರ್ಮಾರ್ಥಕಾಮಮೋಕ್ಷರೂಪಸರ್ವಪುರುಷಾರ್ಥ ಫಲ ಮಿದಂ ರಾಜ್ಯಂ". ಧರ್ಮಾರ್ಥಕಾಮ ಮೋಕ್ಷಗಳು ಮಾನವ ಜೀವನದ ಪರಮೋಧ್ಯೇಯಗಳಾಗಿವೆ. ಇವುಗಳ ಸಿದ್ಧಿಯಿಂದಲೇ ಮಾನವನ ಸಫಲತೆ ಹಾಗೂ ಸಾರ್ಥಕತೆ. ಇವುಗಳಲ್ಲಿ ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳನ್ನು ಮಾನವನು ತನ್ನ ಹಾಗೂ ಸಮಾಜದ ಹಿತಕ್ಕಾಗಿ ಸಾಧಿಸತಕ್ಕದ್ದು. ಕೊನೆಯದಾದ ಮೋಕ್ಷಮಾತ್ರ ವ್ಯಕ್ತಿಕವಾದದ್ದು. ಮಾನವನ ಇನ್ನಿತರ ಸಕಲ ಆಕಾಂಕ್ಷೆ

ಗಳನ್ನೂ ಈ ಚತುರ್ವಿಧ ಪುರುಷಾರ್ಥದಲ್ಲಿ ಸಮಾವೇಶ ಗೊಳಿಸಿ ಅವುಗಳ ಸಮಷ್ಟಿ ಫಲಸಿದ್ಧಿಯೇ ರಾಜ್ಯವೆಂದು ಹೇಳಿದ್ದಾನೆ.

ತ್ರಿವರ್ಗಸಾಧನೆ ಮಾನವನಿಗೆ ರಾಜ್ಯದಿಂದಲೇ ಸಾಧ್ಯವಾಗುತ್ತದೆ. ಆದ್ದರಿಂದ ಧರ್ಮಾರ್ಥಕಾಮಗಳ ಸ್ವರೂಪವನ್ನೂ ವಿವರಿಸಲಾಗಿದೆ. ಧರ್ಮದ ಸ್ವರೂಪವು 'ಯತೋಽಭ್ಯುದಯನಿಃಶ್ರೇಯಸಸಿದ್ಧಿಃ ಸ ಧರ್ಮಃ' ಎಂದು ಹೇಳಲ್ಪಟ್ಟಿದೆ. ಇಹದಲ್ಲಿ ಅಭ್ಯುದಯವನ್ನೂ ಪರದಲ್ಲಿ ಶ್ರೇಯಸ್ಸನ್ನೂ ನೀಡುವಂತಹುದೇ ಧರ್ಮ ಎಂದು ಇದರ ಅರ್ಥ. ಆ ಧರ್ಮದ ಫಲ ಗಳಿಸಲು ಸರ್ವಹಿತ ಚಿಂತನೆ, ಯಥಾಶಕ್ತಿದಾನ (ತ್ಯಾಗ) ಹಾಗೂ ತಪಸ್ಸುಗಳೆಂಬ ಧರ್ಮಸಾಧನಗಳನ್ನು ನಿರ್ದೇಶಿಸಿದ್ದಾನೆ. ಅರ್ಥದ ಸ್ವರೂಪವನ್ನು 'ಯತಃ ಸರ್ವಪ್ರಯೋಜನ ಸಿದ್ಧಿಃ ಸೋಽರ್ಥಃ' ಎಂಬುದಾಗಿ ಹೇಳಿದೆ. ಮಾನವನ ಸಕಲ ಅವಶ್ಯಕತೆಗಳನ್ನೂ ಪೂರೈಸುವಂತಹುದೇ ಅರ್ಥ ಎಂದರೆ ಸಂಪತ್ತು. ಅರ್ಥ ಲಾಭಕ್ಕಾಗಿ ಪ್ರಯತ್ನಪೂರ್ವಕ ಗಳಿಕೆ, ಸಂರಕ್ಷಣೆ, ವೃದ್ಧಿ ಮತ್ತು ಸತ್ಪಾತ್ರದಾನ ದಂತಹ ಮಾರ್ಗೋಪಾಯಗಳನ್ನೂ ಸೂಚಿಸಿದ್ದಾನೆ. 'ಸರ್ವೇಂದ್ರಿಯ ಸಂಪ್ರೀತಿ. ಕಾಮಃ' ಎಂದು ಕಾಮದ ಸ್ವರೂಪವನ್ನು ಹೇಳಿದೆ ಕಾಮವನ್ನು ಧರ್ಮಾರ್ಥಗಳಿಗೆ ವಿರೋಧವಿರದಂತೆ ಸೇವಿಸಬೇಕೆಂದೂ ಹಾಗೆ ಸೇವಿಸಿದಾಗ ಮಾತ್ರ ನಿಜವಾದ ಸುಖ ಪ್ರಾಪ್ತಿಯಾಗುವುದೆಂದೂ ಇದಕ್ಕೆ ವ್ಯತಿರಿಕ್ತವಾಗಿ ಕಾಮವೊಂದನ್ನೇ ಅತಿಯಾಗಿ ಸೇವಿಸಿದರೆ ಅದು ಮಾನವನ ಆತ್ಮನಾಶಕ್ಕೆ ಕಾರಣ ವಾಗುವುದೆಂದೂ ಎಚ್ಚರಿಕೆ ನೀಡಿದ್ದಾನೆ. ಇಂದ್ರಿಯ ಸಂಪ್ರೀತಿಯು ಧರ್ಮಾರ್ಥಗಳ ಸಾಮರಸ್ಯದೊಡನೆ ಉಂಟಾದಲ್ಲಿ ಮಾನವನಲ್ಲಿ ಮಾನಸಿಕ ಸಂತೃಪ್ತಿ ಸಮಾಧಾನಗಳನ್ನು ನೆಲೆಗೊಳಿಸಿ ಅವನನ್ನು ಆಧ್ಯಾತ್ಮಿಕ ಸಾಧನೆಯೆಡೆಗೊಯ್ದು ಚರಮ ಪುರುಷಾರ್ಥವಾದ ಮೋಕ್ಷಸಿದ್ಧಿಗೆ ಕಾರಣವಾಗುತ್ತದೆ. ಇಂತಹ ಪುರುಷಾರ್ಥ ಫಲವಾದ ರಾಜ್ಯವು ಹೇಗೆ ವ್ಯವಸ್ಥೆಗೊಳ್ಳಬೇಕೆಂದೂ ಸಪ್ತಾಂಗಗಳೊಡನೆ ಹೇಗೆ ಸಮರ್ಪಕ ಕಾರ್ಯಾಚರಣೆ ನಡೆಸಬೇಕೆಂದೂ ವಿವರಗಳನ್ನೂ ತನ್ನ ಮುಂದಿನ ಸಮುದ್ದೇಶಗಳಲ್ಲಿ ಸೂತ್ರಿಸಿದ್ದಾನೆ. ಹೀಗೆ ಈ ರಾಜ್ಯ ಪರಿಭಾಷಾ ಸೂತ್ರದ ವಿವರಣೆಯೇ ಆಗಿದೆ ಸೋಮದೇವಸೂರಿಯು ಈ ಇಡೀ ಗ್ರಂಥ ನೀತಿ ವಾಕ್ಯಾಮೃತ.

ಪುರುಷಾರ್ಥ ಸಿದ್ಧಿಯನ್ನು ಮಾನವನಿಗೆ ರಾಜ್ಯವು ಹೇಗೆ ಉಂಟು ಮಾಡುವುದೆಂಬುದನ್ನು ಗ್ರಂಥದ ಐದನೆ ಅಧ್ಯಾಯ ವಿದ್ಯಾವೃದ್ಧ ಸಮುದ್ದೇಶದಲ್ಲಿ ಇನ್ನೊಂದು ರಾಜ್ಯ ಪರಿಭಾಷಾ ಸೂತ್ರದಲ್ಲಿ ಹೇಳಿದೆ. ಈ ಸೂತ್ರ ಹೀಗಿದೆ : "ರಾಜ್ಞಃ ಪೃಥ್ವೀಪರಿಪಾಲನೋಚಿತಂ ಕರ್ಮ ರಾಜ್ಯಂ" ಇದರ ಅರ್ಥ ರಾಜನ ಯಥಾಯೋಗ್ಯ ಪೃಥ್ವೀಪರಿಪಾಲನಾ ಕಾರ್ಯ (ರಾಜ್ಯಭಾರ)ವೇ ರಾಜ್ಯ ಎಂದು. ರಾಜನ್ ಶಬ್ದವು ಮೂಲತಃ 'ಆಳು' ಎಂಬರ್ಥ ಕೊಡುವ 'ರಾಟ್' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ ಪ್ರಜೆಗಳನ್ನು ಭೂಮಿಯನ್ನೂ ಪರಿಪಾಲಿಸು ವವನೇ, ಆಳುವವನೇ ರಾಜ. ಪೃಥ್ವಿಯನ್ನು ವರ್ಣಾ ಶ್ರಮವತೀ ಪಶುಹಿರಣ್ಯಧಾನ್ಯಫಲದಾ' ಎಂದು ಹೇಳಲಾಗಿದೆ. ಈ ಉಕ್ತಿಯಿಂದ ಪೃಥ್ವಿ ಅಥವಾ ಭೂಮಿಯು ಪ್ರಜೆಗಳ ವರ್ಣಾಶ್ರಮರೂಪ ಸಾಮಾಜಿಕ ವ್ಯವಸ್ಥೆಯಿಂದ ಕೂಡಿದೆ ಹಾಗೂ ಪ್ರಜೆಗಳ ಜೀವನ ಸಮೃದ್ಧಿಯನ್ನುಂಟು ಮಾಡುತ್ತದೆ ಎಂದು ಸಿದ್ಧ ವಾಗುತ್ತದೆ. ಇಂತಹ ಭೂಮಿಯ ಪರಿಪಾಲನೆಯನ್ನು ರಾಜ ನಡೆಸಬೇಕು. ಇಲ್ಲಿ ಪರಿಪಾಲನೆಯೆಂದರೆ ಶಿಷ್ಟರಕ್ಷಣೆ ಮತ್ತು ದುಷ್ಟಶಿಕ್ಷಣೆ. ರಾಜನ ಶಿಷ್ಟ ರಕ್ಷಣಾ ಕಾರ್ಯ ಪ್ರಜೆಗಳನ್ನು ಆಂತರಿಕ ಹಾಗೂ ಬಾಹ್ಯ ಶತ್ರುಗಳಿಂದ ರಕ್ಷಿಸುವುದು, ದುರ್ಬಲರಿಗೂ ಆಶ್ರಯ ಹೀನರಿಗೂ ಆಶ್ರಯ ಕೊಡುವುದು, ಎಲ್ಲ ಧರ್ಮಗಳಿಗೂ ಧರ್ಮೀಯರಿಗೂ ಸಮಾನವಾಗಿ ಪ್ರೋತ್ಸಾಹ ಮತ್ತು ಸ್ವಾತಂತ್ರ್ಯ ನೀಡಿ ಮತೀಯ ಸೌಹಾರ್ದವನ್ನುಂಟು ಮಾಡುವುದು, ಸಾಧು ಸಜ್ಜನರಿಗೂ, ಗಾಯಕ, ಕವಿ, ಪಂಡಿತ, ನೃತ್ಯಂಗಾರ, ವಾದಕ, ಚಿತ್ರಕಾರ, ಶಿಲ್ಪಿ ಮುಂತಾದ ಕಲಾಕಾರರಿಗೆ ಪೋಷಣೆ ನೀಡುವುದು. ಸ್ವಧರ್ಮ ಎಂದರೆ ರಾಜಧರ್ಮ ಮತ್ತು ಸಾಮಾನ್ಯ ಧರ್ಮ ಎಂದರೆ ಮಾನವಧರ್ಮವನ್ನು ಅನುಸರಿಸಿ ತನ್ಮೂಲಕ ಸ್ನೇಹಯುತ ಬಂಧುರ ಸಾಮಾಜಿಕ ಪರಿಸರವನ್ನು ಏರ್ಪಡಿಸುವುದೂ, ಕೃಷಿ, ಕೈಗಾರಿಕೆ, ವಾಣಿಜ್ಯ, ವ್ಯಾಪಾರಗಳಿಗೆ ಉತ್ತೇಜನ, ನೆರವುಗಳನ್ನು ನೀಡಿ ಆರ್ಥಿಕ ಸಮೃದ್ಧಿಯನ್ನುಂಟುಮಾಡುವುದು

ಮುಂತಾದ ಕರ್ತವ್ಯಗಳನ್ನು ಯೋಗ್ಯರೀತಿಯಲ್ಲಿ ನಿರ್ವಹಿಸುವುದರಿಂದ ಸಾಧಿತವಾಗುತ್ತದೆ. ಪರಿಪಾಲನೆಯು ಇನ್ನೊಂದು ಮುಖವಾದ ದುಷ್ಟಶಿಕ್ಷಣೆಯ ಕಾರ್ಯವು ರಾಜನು ದುಷ್ಟರಾದ ರಾಜದ್ರೋಹಿಗಳು, ನಯ ವಂಚಕರು, ದರೋಡೆಕಾರರು, ಲಂಚಕೋರರು, ಪ್ರಜಾಪೀಡಕ ಅಧಿಕಾರಿಗಳು ಮುಂತಾದ ಸಮಾಜ ವಿರೋಧೀ ಜನರ ಅಪರಾಧಗಳನ್ನು ಪತ್ತೆಹಚ್ಚಿ, ಅಪರಾಧಿಗಳನ್ನು ಹಿಡಿತರಿಸಿ ಅವರ ಅಪರಾಧಗಳು ಸಾಕ್ಷ್ಯಾಧಾರಗಳಿಂದ ಸಾಬೀತಾದರೆ ಅಪರಾಧಗಳ ತೀವ್ರತೆಗೆ ಅನುಗುಣವಾಗಿ, ಧರ್ಮಶಾಸ್ತ್ರನಿಯ ಮಗಳಿಗನುಸಾರವಾಗಿ, ತನ್ನ ದಂಡಾಧಿಕಾರವನ್ನು ಶಿಕ್ಷೆ, ದಂಡ ವಿಧಿಸುವುದರ ಮೂಲಕ ಪ್ರಯೋಗಿಸಿ ಪ್ರಜೆಗಳಿಗೆ ನ್ಯಾಯ ದೊರಕಿಸಿ ರಕ್ಷಣೆಕೊಡುವುದರಿಂದ ಸಾಧಿತವಾಗು ತ್ತದೆ. ದುಷ್ಟ ಶಿಕ್ಷಣೆಯ ಜೊತೆಗೆ ನ್ಯಾಯ ತೀರ್ಮಾನ ಹಾಗೂ ಶಿಕ್ಷೆ ವಿಧಿಸುವಿಕೆಯಲ್ಲಿ ರಾಜನು ತನ್ನ ನಿಷ್ಪಕ್ಷ ಪಾತದಿಂದ, ಧರ್ಮದೃಷ್ಟಿಯಿಂದ, ಸದ್ವರ್ತನೆಯಿಂದ ಅಪರಾಧಿಗಳ ಮನಃ ಪರಿವರ್ತನೆಗೊಳಿಸಿ ದುಷ್ಟರ ದುಷ್ಟತನವನ್ನು ನಿವಾರಿಸಿ ಅವರನ್ನು ಸನ್ಮಾರ್ಗಕ್ಕೆ ತರುವ ಕ್ರಮಗಳನ್ನೂ ಅಗತ್ಯವಾಗಿ ಕೈಗೊಳ್ಳಬೇಕು.

ಈ ಮೇಲೆ ಹೇಳಿದ ಭೂ ಪರಿಪಾಲನಾ ಕಾರ್ಯ ವನ್ನು ಉಚಿತ ರೀತಿಯಲ್ಲಿ ನಿರ್ವಹಿಸಲು ಸಾಧ್ಯವಾಗು ವಂತೆ ಮಾಡಲು ರಾಜಕುಮಾರರಿಗೆ ತಾವು ಸಿಂಹಾಸನಸ್ಥ ರಾಗುವ ಪೂರ್ವದಲ್ಲಿ ಯೋಗ್ಯ ಶಿಕ್ಷಣ ನೀಡುವುದರ ಪ್ರಾಮುಖ್ಯತೆಯ ಬಗ್ಗೆ ಒತ್ತಿ ಹೇಳಿದ್ದಾನೆ ಕೃತಿಕಾರ ಸೋಮದೇವಸೂರಿ. ಅವನ ಅಭಿಪ್ರಾಯದಲ್ಲಿ ವಿದ್ಯಾ ಸಂಸ್ಕಾರನು ಪಡೆಯದ ರಾಜವನ್ನು ಸಂಸ್ಕರಣಕ್ಕೊಳ ಗಾಗದ ಕೇವಲ ಕಲ್ಲು ತುಂಡಿನಂತಿರುವ ರತ್ನದಂತೆ ನಿಷ್ಪ್ರ ಯೋಜಕ ಹಾಗೂ ಮೂರ್ಖರಾಜನಿರುವ ರಾಜ್ಯಕ್ಕಿಂತ ಅರಾಜಕ ರಾಜ್ಯವೇ ಶ್ರೇಷ್ಠವೆನಿಸುತ್ತದೆ. ಆದ್ದರಿಂದ ಪ್ರತಿ ಯೊಬ್ಬ ರಾಜಕುಮಾರನಿಗೂ ಬಾಲ್ಯಾವಸ್ಥೆಯಲ್ಲಿಯೇ ಸಮರ್ಥ ಗುರುಗಳಿಂದ ಕಡ್ಡಾಯವಾಗಿ ಮತ್ತು ಯಥೋ ತಚಿವಾಗಿ ಚತುರ್ವಿಧ ರಾಜವಿದ್ಯೆಗಳಾದ ತ್ರಯೀ, ಅನ್ವೀಕ್ಷಕೀ, ವಾರ್ತಾ ಹಾಗೂ ದಂಡನೀತಿಗಳಲ್ಲಿ ಶಿಕ್ಷಣ ಕೊಡಿಸ ತಕ್ಕದ್ದು. ಈ ಚತುರ್ವಿಧ ರಾಜವಿದ್ಯೆಗಳಲ್ಲಿ ಶಿಕ್ಷಣ ನೀಡುವುದರಿಂದ ರಾಜನಿಗೆ ಉಂಟಾಗುವ ಪ್ರಯೋ ಜನಳನ್ನೂ ವಿವರಿಸಿದ್ದಾನೆ. ತ್ರಯಿ ಶಿಕ್ಷಣದಿಂದ ಧರ್ಮದ ಸ್ವರೂಪ, ಚಾತುರ್ವರ್ಣ, ಚಾತುರಾಶ್ರಮಗಳ ಆಚಾರ ನಿಯಮಗಳ ಜ್ಞಾನ ಮತ್ತು ಧರ್ಮಸಿದ್ಧಿ ಸಾಧನ ಕ್ರಮ ತಿಳಿದುಬರುತ್ತದೆ. ಅನ್ವೀಕ್ಷಕೀ ಶಿಕ್ಷಣದಿಂದ ಮಾನವ ಸಹಜ ಶಾರೀರಿಕ ಮಾನಸಿಕ ದೋಷಗಳ ನಿವಾರಣೆ ಮತ್ತು ಆಧ್ಯಾತ್ಮಿಕ ಪ್ರಗತಿಗಳು ಸಾಧ್ಯವಾಗು ತ್ತವೆ. ವಾರ್ತಾ ಶಿಕ್ಷಣದಿಂದ ಮಾನವ ಜೀವನದ ಆರ್ಥಿಕ ಸಂಪನ್ನತೆಗೆ ಸಾಧನಗಳಾದ ಕೃಷಿ, ಕುಶಲಕರ್ಮ, ವ್ಯಾಪಾರ ಮುಂತಾದುವುಗಳ ವೃದ್ಧಿಗಾಗಿ ಮಾರ್ಗೋ ಪಾಯಗಳ ನಿದರ್ಶನದಿಂದ ವ್ಯವಹಾರ ಜ್ಞಾನ ಕುಶಲತೆ ಯು ಪ್ರಾಪ್ತವಾಗುತ್ತವೆ. ದಂಡನೀತಿ ಶಿಕ್ಷಣದಿಂದ ದಂಡಾಧಿಕಾರದ ಸಮುಚಿತ ಪ್ರಯೋಗ, ದುಷ್ಟ ನಿಗ್ರಹ ಪರಿಜ್ಞಾನ, ನ್ಯಾಯಾನ್ಯಾಯಗಳ ವಿವೇಚನೆ ಪ್ರಾಪ್ತ ವಾಗುತ್ತದೆ. ಈ ರೀತಿಯಾಗಿ ವಿದ್ಯಾವಿನಯ ಸಂಪನ್ನನಾದ ರಾಜ ಮಾತ್ರ ವಿವೇಕಿಯಾಗಿ ಉಚಿತಾನು ಚಿತವನ್ನು ತಿಳಿದು ಭೂಪ್ರಜಾ ಪರಿಪಾಲನಾ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುತ್ತಾನೆ.

ರಾಜ್ಯಾಧಿಕಾರ ಪಡೆದ ರಾಜನಿಗೆ ಅವನ ಎಲ್ಲ ಕಾರ್ಯಗಳ ಸಮಯೋಚಿತ ಹಾಗೂ ಸಮುಚಿತ ನಿರ್ವಹಣೆಗಾಗಿ ಕಾರ್ಯಧುರಂಧರರಾದ ಮಂತ್ರಿ, ಅಮಾತ್ಯ ಮುಂತಾದ ಅಧಿಕಾರಿವರ್ಗವನ್ನೂ ರಕ್ಷಣಾ ಕಾರ್ಯಕ್ಕಾಗಿ, ಯುದ್ಧ ನಡೆಸಲು ಸೇನೆಯನ್ನೂ, ರಕ್ಷಣೆ ನೀಡುವ ದುರ್ಗವನ್ನೂ, ತುಂಬಿ ತುಳುಕುವ ಬೊಕ್ಕಸವನ್ನೂ ಆ ಸಮುದ್ರ ಪರ್ಯಂತ ಭೂ ಒಡೆತನದ ಹಕ್ಕನ್ನೂ ನೀಡಲಾಗಿದೆ. ಆದ್ದರಿಂದಲೇ ಇವುಗಳಿಗೆ ರಾಜ್ಯಾಂಗಗಳೆಂದು ಹೆಸರಿದೆ. ರಾಜ್ಯಾಂಗ ಗಳ ಜೊತೆಗೆ ರಾಜನಿಗೆ ಸಾಮಂತರಿಂದ ಕಪ್ಪ ಕಾಣಿಕೆ ಪಡೆಯುವ, ಪ್ರಜೆಗಳಿಂದ ಕರವಸೂಲಿ ಮಾಡುವ, ಅರಮನೆ, ಪರಿವಾರ, ಸಿಂಹಾಸನ, ರಾಜದಂಡ, ಧವಳಛತ್ರ, ಪತಾಕೆ, ರಾಜಮುದ್ರೆಗಳಂತಹ ರಾಜ ಚಿಹ್ನೆಗಳನ್ನು ಹೊಂದುವ ವೈಭವ ಜೀವನ ನಡೆಸಲು ವಿಶೇಷ ಅನುಕೂಲತೆಗಳು, ಸವಲತ್ತುಗಳೂ ನೀಡಲ್ಪಟ್ಟಿವೆ. ಈ ಅಧಿಕಾರ, ಸವಲತ್ತುಗಳನ್ನು ಬಳಸಿಕೊಂಡು ರಾಜ ರಾಜ್ಯಾಂಗಗಳ ಮೇಲೆ ಸ್ವಾಮಿತ್ವವನ್ನು ಹೊಂದಿ, ಅವುಗಳ ಸೂಕ್ತವ್ಯವಸ್ಥೆ, ಕ್ರೋಢೀಕರಣ, ಸಹಯೋಗಗಳನ್ನೇರ್ಪಡಿಸಿ ಪ್ರಜೆಗಳ

ತ್ರಿವರ್ಗಸಾಧನೆಯನ್ನೂ ಮತ್ತು ಶಿಷ್ಟರಕ್ಷಣ ದುಷ್ಟ ಶಿಕ್ಷಣಗಳನ್ನೊಳಗೊಂಡ ಭೂಪಾರಿಪಾಲನಾ ಕಾರ್ಯ ವನ್ನು ಯಶಸ್ವಿಯಾಗಿ ನಿರ್ವಹಿಸುತ್ತಾನೆ. ಇಂತಹ ಯಶಸ್ವೀ ರಾಜನನ್ನೇ ಪರಮದೈವತವೆಂದೂ, ಲೋಕಪಾಲಕರಿಗಿಂತ ಉತ್ತಮ ಲೋಕಪಾಲಕನೆಂದೂ ಅನುಕೂಲವರ್ತನೆಯುಳ್ಳ ಶಿಷ್ಟ ಸಜ್ಜನರಿಗೆ ಸರ್ವಾಭೀಷ್ಟಗಳ ಮಳೆಗರೆಯುವ ಇಂದ್ರನಂತೆಯು ಪತಿಕೂಲ ವರ್ತನೆಯುಳ್ಳ ದುಷ್ಟದುರ್ಜನರಿಗೆ ಮರಣ ದಂಡನೆ ಮುಂತಾದ ಶಿಕ್ಷೆಗಳನ್ನು ವಿಧಿಸುವ ಮೂಲಕ ಭಯವನ್ನುಂಟು ಮಾಡುವ ಯಮನಂತೆಯೂ ಭಾವಿಸಲಾಗಿದೆ. ಈ ಬಗೆಯಾಗಿ ರಾಜನು ಸಮುಚಿತ ವಾಗಿ ನೆರವೇರಿಸುವ ತ್ರಿವರ್ಗಸಾಧನೆ ಮತ್ತು ಭೂ ಪರಿಪಾಲನಾ ಕರ್ತವ್ಯಗಳನ್ನು ಮತ್ತು ರಾಜ್ಯಭಾರವನ್ನೇ ರಾಜ್ಯವೆಂದು ಸಮೀಕರಿಸಿರುವುದು ಸಮೀಚೀನವೇ ಆಗಿದೆ. ○